# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಫೆಬ್ರವರಿ ೧೧, ೨೦೧೬ (ಮಾಘ ೨೨, ಶಕ ವರ್ಷ ೧೯೩೭)<br>Bengaluru, Thursday, February 11, 2016 (Magha 22, Shaka Varsha 1937) | ಸಂಚಿಕೆ ೬<br>Issue 6 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕಸೇವಾ ಆಯೋಗ,**

**ಉದ್ಯೋಗ ಸೌಧ, ಬೆಂಗಳೂರು –560001**

**ಅಧಿಸೂಚನೆ**

**ಸಂಖ್ಯೆ: ಇ(2) 3258/2015–16/ಪಿಎಸ್‌ಸಿ, ದಿನಾಂಕ: 28–12–2015,**

**ವಿಷಯ:** ಅಬಕಾರಿ ಉಪ ನಿರೀಕ್ಷಕರ ಹುದ್ದೆಯ ಅಭ್ಯರ್ಥಿ ಶ್ರೀ ಪಿ.ಜೆ.ಜಾನ್ ಇವರ ಆಯ್ಕೆಯ ಬಗ್ಗೆ.

**ಉಲ್ಲೇಖ:**

1) ಆಯೋಗದ ಅಧಿಸೂಚನೆ ಸಂಖ್ಯೆ: ಇ(2) 898/2014–15/ಪಿಎಸ್‌ಸಿ, ದಿನಾಂಕ: 07–12–2012.
2) ಆಯೋಗದ ಅಧಿಸೂಚನೆ ಸಂಖ್ಯೆ: ಇ(2) 1228/2014–15/ಪಿಎಸ್‌ಸಿ, ದಿನಾಂಕ: 20–11–2014.
3) ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ 9679/2014ರ ಮೇಲೆ ದಿನಾಂಕ: 27–08–2015ರ ಅಂತಿಮ ಆದೇಶ.
4) ಆಯೋಗದ ಪತ್ರ ಸಂಖ್ಯೆ: ಇ(2) 3185/2015–16, ಪಿಎಸ್‌ಸಿ, ದಿನಾಂಕ: 15–10–2015.
5) ಅಬಕಾರಿ ಆಯುಕ್ತರ ಪತ್ರ ಸಂಖ್ಯೆ: ಇಸಿಇ/91/ಅಉನಿ/ಎಪಿಟಿ/ಡಿಆರ್‌ಸಿ/2014 ದಿ: 24–11–2015.

ಅಬಕಾರಿ ಇಲಾಖೆಯಲ್ಲಿನ 2013ನೇ ಸಾಲಿನ ಅಬಕಾರಿ ಉಪ ನಿರೀಕ್ಷಕರ ಹುದ್ದೆಯ ಅಭ್ಯರ್ಥಿ ಶ್ರೀ ಜಾನ್ ಪಿ.ಜೆ. ಇವರು ಮೇಲ್ಕಂಡ ಹುದ್ದೆಗಳ ಮೂಲ ದಾಖಲೆಗಳ ಪರಿಶೀಲನೆಯ ಸಮಯದಲ್ಲಿ ಅಭ್ಯರ್ಥಿಯು ತನ್ನ ಹೆಸರಿನಲ್ಲಿ ಪಡೆಯಲಾದ ಪ್ರವರ್ಗ–3(ಬಿ) ಮೀಸಲಾತಿ ಪ್ರಮಾಣ ಪತ್ರ ಸಲ್ಲಿಸದೇ, ತನ್ನ ತಂದೆಯ ಹೆಸರಿನಲ್ಲಿರುವ ಪ್ರವರ್ಗ–3(ಬಿ) ಮೀಸಲಾತಿ ಪ್ರಮಾಣ ಪತ್ರ ಸಲ್ಲಿಸಲಾದ ಕಾರಣ, ಸರಿಯಾದ ಮಿಸಲಾತಿ ಪ್ರಮಾಣ ಪತ್ರ ಸಲ್ಲಿಸಲು ಅವಕಾಶ ನೀಡಿದ್ದು, ನಿಗದಿತ ಕಾಲಾವಕಾಶದಲ್ಲಿ ಸರಿಯಾದ ಅಂದರೆ ಅಭ್ಯರ್ಥಿಯ ಹೆಸರಿನಲ್ಲಿ ಪಡೆಯಲಾದ ಪ್ರಮಾಣ ಪತ್ರವನ್ನು ಸಲ್ಲಿಸದ ಕಾರಣ ಅಭ್ಯರ್ಥಿಯ ಮೀಸಲಾತಿ ತಿರಸ್ಕರಿಸಿ ಸಾಮಾನ್ಯ ಅರ್ಹತೆಯಡಿ ಪರಿಗಣಿಸಲಾಗಿತ್ತು.

ಅಭ್ಯರ್ಥಿಯು ಮೇಲ್ಕಂಡ ಆಯೋಗದ ಕ್ರಮದ ವಿರುದ್ಧ ನ್ಯಾಯಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು, ಮಾನ್ಯ ನ್ಯಾಯಮಂಡಳಿಯು ಉಲ್ಲೇಖ–(3)ರ ತನ್ನ ಅಂತಿಮ ಆದೇಶದಲ್ಲಿ ಅಭ್ಯರ್ಥಿಯನ್ನು ಆಯ್ಕೆಗೆ ಪರಿಗಣಿಸುವಂತೆ ತೀರ್ಪು ನೀಡಲಾದ ಹಿನ್ನೆಲೆಯಲ್ಲಿ, ಆಯೋಗವು ಆಯ್ಕೆಪಟ್ಟಿಯನ್ನು ಅಂತಿಮಗೊಳಿಸಲಾದ ಕಾರಣ ಹುದ್ದೆಗಳ ಅಲಭ್ಯತೆಯಿಂದಾಗಿ ಅಭ್ಯರ್ಥಿಯನ್ನು ನ್ಯಾಯಮಂಡಳಿಯ ಆದೇಶದನ್ವಯ ಆಯ್ಕೆ ಮಾಡಲು ಒಂದು ಸಂಖ್ಯಾತಿರಿಕ್ತ ಹುದ್ದೆಯನ್ನು ಸೃಜಿಸಿ ಮಾಹಿತಿ ನೀಡುವಂತೆ ಉಲ್ಲೇಖ–(4) ರ ಪತ್ರದಲ್ಲಿ ಆಯುಕ್ತರನ್ನು ಕೋರಲಾಗಿದ್ದಿತು.

ಆಯೋಗದ ಪತ್ರಕ್ಕೆ ಉತ್ತರವಾಗಿ ಅಬಕಾರಿ ಆಯುಕ್ತರು ಉಲ್ಲೇಖ–(5) ರ ಪತ್ರದಲ್ಲಿ, ಪ್ರಸ್ತುತ ಇಲಾಖೆಯಲ್ಲಿ ಒಟ್ಟು 178 ನೇರ ನೇಮಕಾತಿಯ ಹುದ್ದೆಗಳು ಲಭ್ಯವಿದ್ದು, ಅವುಗಳಲ್ಲಿ ಶ್ರೀ ಪಿ.ಜೆ. ಜಾನ್, ಇವರನ್ನು ಆಯ್ಕೆಗೆ ಪರಿಗಣಿಸಿ ಮತ್ತು ಜೇಷ್ಠತೆಯನ್ನು ನಿರ್ಧರಿಸುವಂತೆ ಕೋರಲಾಗಿದ್ದು, ಅದರಂತೆ ಅಭ್ಯರ್ಥಿ ಶ್ರೀ ಪಿ.ಜೆ. ಜಾನ್ (ನೋಂದಣಿ ಸಂಖ್ಯೆ 623156) ಇವರನ್ನು ಅಬಕಾರಿ ಉಪ ನಿರೀಕ್ಷಕರ ಹುದ್ದೆಗೆ ಪ್ರವರ್ಗ–3(ಬಿ)/ಮಾಜಿ ಸೈನಿಕ ಮೀಸಲಾತಿಯಡಿ ಆಯ್ಕೆಮಾಡಿದ್ದು, ಸಂಬಂಧಿತ ಅಭ್ಯರ್ಥಿಯ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

ಅಭ್ಯರ್ಥಿ ಶ್ರೀ ಪಿ.ಜೆ. ಜಾನ್ ಇವರ ಜೇಷ್ಠತೆಯನ್ನು ಉಲ್ಲೇಖ–(2)ರ ಅಂತಿಮ ಆಯ್ಕೆಪಟ್ಟಿಯಲ್ಲಿನ ಕ್ರಮ ಸಂಖ್ಯೆ 189ರ ಅಭ್ಯರ್ಥಿ ಶ್ರೀಮತಿ ರುಕ್ಮಿಣಿ ಕೆ.ಕೆ. (ನೋಂದಣಿ ಸಂಖ್ಯೆ 600971) ಮತ್ತು ಕ್ರಮ ಸಂಖ್ಯೆ 190ರಲ್ಲಿನ ಅಭ್ಯರ್ಥಿ ಶ್ರೀ ನಾರಾಯಣ ಎಂ. (ನೋಂದಣಿ ಸಂಖ್ಯೆ 602911) ಇವರ ಮಧ್ಯೆ ನಿಗದಿಪಡಿಸಲಾಗಿರುತ್ತದೆ. ಅಂತೆಯೇ ದಿನಾಂಕ:20–11–2014ರ ಅಂತಿಮ ಆಯ್ಕೆಪಟ್ಟಿಯ ಅಧಿಸೂಚನೆಯಲ್ಲಿನ ಷರತ್ತುಗಳು ಈ ಅಭ್ಯರ್ಥಿಗೂ ಸಹ ಅನ್ವಯವಾಗುತ್ತವೆ.

**ಮನೋಜ್ ಕುಮಾರ್ ಮೀನಾ ಭಾ.ಆ.ಸೇ**
ಕಾರ್ಯದರ್ಶಿ
ಕರ್ನಾಟಕ ಲೋಕಸೇವಾ ಆಯೋಗ

**P.R.12**
**SC. 30**

## ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಾರ್ಯಾಲಯ, ಮೈಸೂರು

### ಅಧಿಸೂಚನೆ

**ಸಂಖ್ಯೆಃ ಆಡಳಿತ/ನೇಮಕಾತಿ(ಶೀ)/617 /2016, ಮೈಸೂರು, ದಿನಾಂಕ : 11.01.2016.**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ದಿನಾಂಕ 20.01.2016ರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕಃ 25.02.2016ರ ಅಪರಾಹ್ನ 05.00 ಗಂಟೆ.

ವಿಶೇಷ ಸೂಚನೆಃ

1. ಅರ್ಜಿಗಳು ಕಡ್ಡಾಯವಾಗಿ ನಿಗಧಿತ ನಮೂನೆಯಲ್ಲಿಯೇ ಇರಬೇಕು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಚಾಲ್ತಿಯಲ್ಲಿರುವ ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸಬೇಕು.
3. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಮಾರಾಟ ಮಾಡಲಾಗುವುದಿಲ್ಲ. ಆದರೆ, ನಮೂನೆಯನ್ನು ಈ ಕಛೇರಿಯ ವೆಬ್‌ಸೈಟ್ http://ecourts.gov.in/mysuru ಇಂದ ಪ್ರತಿ ಮಾಡಿಕೊಂಡು ಬಳಸಬಹುದು.

**ಹುದ್ದೆಯ ಹೆಸರು : ಶೀಘ್ರಲಿಪಿಗಾರರುಃ**

**ಖಾಲಿ ಹುದ್ದೆಗಳು – 14**

**ವೇತನ ಶ್ರೇಣಿ :** 14550-350-15600-400-17200-450-19000-500–21000-600–24600-700-26700.

**ಹುದ್ದೆಗಳ ವರ್ಗೀಕರಣಃ**

**ಬ್ಯಾಕ್‌ಲಾಗ್ 13 ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಯೋ.ನಿ.ಅ | ಅಂ.ವಿ. | ಒಟ್ಟು |
|---|---|---|---|---|---|---|---|
| ಪ.ಪಂಗಡ | – | 01 | 01 | – | – | – | 02 |
| ಪ್ರವರ್ಗ - I | – | – | – | – | – | 01 * | 01 |
| II – ಎ | 01 | 01 | – | 01 | – | – | 03 |
| ಸಾಮಾನ್ಯ | 02 | 01 | 02 | 01 | 01 | – | 07 |
| ಒಟ್ಟು | 03 | 03 | 03 | 02 | 01 | 01 | 13 |

* **ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ ಅಭ್ಯರ್ಥಿ** (Blind & Low Vision)

**ಹೊಸ 01 ಹುದ್ದೆಯ ವರ್ಗೀಕರಣ**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಯೋ.ನಿ.ಅ | ಅಂ.ವಿ. | ಒಟ್ಟು |
|---|---|---|---|---|---|---|---|
| ಪ.ಜಾತಿ | – | – | 01 | – | – | – | 01 |

**ವಿದ್ಯಾರ್ಹತೆಃ** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಮತ್ತು ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ :** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 05 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿಃ** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**ವಿಶೇಷ ಟಿಪ್ಪಣಿಃ**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಹಾಗೂ ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ವರ್ಗದ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಆಯಾ ಪ್ರವರ್ಗಗಳ ಅರ್ಹ ಅಭ್ಯರ್ಥಿಗಳ ಲಭ್ಯತೆಯ ಕೊರತೆಯಿಂದಾಗಿ ಭರ್ತಿ ಮಾಡಲಾಗದ ರಿಕ್ತ ಸ್ಥಾನಗಳನ್ನು ಬ್ಯಾಕ್‌ಲಾಗ್ ಎಂದು ಪರಿಗಣಿಸಿ ಮುಂದಕ್ಕೆ ಕೊಂಡೊಯ್ಯಲಾಗುವುದು.

ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ (Blind & Low Vision) ಅಭ್ಯರ್ಥಿಗಳು ಲಭ್ಯವಿಲ್ಲದೇ ಇದ್ದಲ್ಲಿ, ಆ ಹುದ್ದೆಗಳನ್ನು ಆಯಾ ವರ್ಗದ, ಗುರುತಿಸಲಾದ ಇತರೇ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

<u>ವಯೋಮಿತಿ:</u>

**ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು**

ಅ. **ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.**

ಆ. **ಗರಿಷ್ಠ ವಯೋಮಿತಿ**

| | |
|---|---|
| **ಸಾಮಾನ್ಯ ವರ್ಗ** | **35 ವರ್ಷ** |
| **2ಎ** | **38 ವರ್ಷ** |
| **ಪ.ಜಾತಿ, ಪ.ಪಂಗಡ, ಪ್ರವರ್ಗ – 1** | **40 ವರ್ಷ** |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

<u>ವಯೋಮಿತಿ ಸಡಿಲಿಕೆ:</u>

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 03 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.
4. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೊ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೊ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
5. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
6. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

<u>ಪರಿವೀಕ್ಷಣಾ ಅವಧಿ:</u>

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು), 1977ರ ಪ್ರಕಾರ 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

ಆಯ್ಕೆಯಾದ ಅಭ್ಯರ್ಥಿಗಳು, ಸರ್ಕಾರವು ನಿಗಧಿಪಡಿಸುವ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಅವರ ಪರಿವೀಕ್ಷಣಾವಧಿಯೊಳಗೆ ಅಥವಾ ಸದರಿ ನಿಯಮಗಳು ಶುರುವಾದ ದಿನಾಂಕದಿಂದ 05 ವರ್ಷದೊಳಗೆ ಅಥವಾ ಇದರಲ್ಲಿ ಯಾವುದು ನಂತರದ ದಿನಾಂಕವೊ, ಆ ಅವಧಿಯೊಳಗೆ ಪಾಸು ಮಾಡತಕ್ಕದ್ದು.

<u>ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:</u>

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ:**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ, **ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು.** ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ **ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು** ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ **ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ (ಸಹಿ ಮಾಡಿ)** ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು – 570 005", ಇವರಿಗೆ ದಿನಾಂಕ: 25.02.2016ರ ಅಪರಾಹ್ನ 05.00 ಗಂಟೆಯೊಳಗೆ** ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾರೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ **ಸ್ವಯಂ ದೃಢೀಕರಿಸಿದ (ಸಹಿ ಮಾಡಿದ)** ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಹೊರತುಪಡಿಸಿದರೂ ಸಹ ಅಭ್ಯರ್ಥಿಯ ಅರ್ಜಿಯು ಸಿಂಧುವಾಗುವಂತಿದ್ದಲ್ಲಿ ಮಾತ್ರ ಅಂತಹ ಅರ್ಜಿಗಳನ್ನು ಪುರಸ್ಕರಿಸಲಾಗುವುದು, ಇಲ್ಲದಿದ್ದಲ್ಲಿ ತಿರಸ್ಕರಿಸಲಾಗುವುದು.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ನಿಗಧಿತ ಸ್ಥಳದಲ್ಲಿ ಅಂಟಿಸಿರಬೇಕು.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ.ಅಂಕ ಪಟ್ಟಿ / ಕ್ಯುಮುಲೇಟಿವ್ ರೆಕಾರ್ಡ್ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಡಿಪ್ಲೋಮಾ ಪರೀಕ್ಷೆಯಲ್ಲಿ ಬೆರಳಚ್ಚು ಮತ್ತು ಶೀಘ್ರಲಿಪಿ ತೇರ್ಗಡೆಯಾಗಿದ್ದಲ್ಲಿ, 03 ವರ್ಷದ / 06 ಸೆಮಿಸ್ಟರ್‌ನ ಅಂಕಪಟ್ಟಿಗಳನ್ನು ಮತ್ತು ಡಿಪ್ಲೋಮಾ ಸರ್ಟಿಫಿಕೆಟ್‌ನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು.
5. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ, ಪ್ರವರ್ಗ-1ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/96/ಸೇನನಿ/2005 ದಿನಾಂಕ: 10.08.2005ರ ಪ್ರಕಾರ ನಿಗಧಿತ ನಮೂನೆ – 2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
7. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ-2ರ ಜೊತೆ ನಮೂನೆ-1ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
8. ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗಧಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.
9. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಸಿಆಸುಇ/115/ಸೇನನಿ/2005ರಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.
10. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/44/ಸೇನನಿ/2001ರ ದಿನಾಂಕ 27.07.2001ರಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.
11. ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.
12. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.
13. ಸ್ವಯಂ ವಿಳಾಸವಿರುವ ₹5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆ:**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಹಾಗೂ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಕೆ.ಎಸ್. ಮುದಗಲ್,**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಮೈಸೂರು.

## ಅರ್ಜಿ ನಮೂನೆ

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು.

**ರವರಿಗೆ**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**
**ಮೈಸೂರು.**

ದಿನಾಂಕಃ 11.01.2016ರ ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ: ಆಡಳಿತ/ನೇಮಕಾತಿ(ಶೀ)/617/2016 ಮೇರೆಗೆ ನಾನು **ಶೀಘ್ರಲಿಪಿಗಾರರ** ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ / ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |
| 6 | ಲಿಂಗ | ಪುರುಷ | ಮಹಿಳೆ | ಇತರೆ |
| | | | | |
| 7 | ರಾಷ್ಟ್ರೀಯತೆ | | | |
| 8 | ಧರ್ಮ ಮತ್ತು ಜಾತಿ | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| | | | | |

| | | | | | |
|---|---|---|---|---|---|
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | ಹೌದು | | ಇಲ್ಲ | |
| | | | | | |
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ? | ಹೌದು | | ಇಲ್ಲ | |
| | | | | | |
| 13 | ಕೋರುವ ಮೀಸಲಾತಿಗಳು (ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ-1 |
| | | | | | |
| | | 2ಎ | 2ಬಿ | 3ಎ | 3ಬಿ |
| | | | | | |
| 14 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ? (ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಮಾ.ಸೈ | ಯೋ.ನಿ.ಅ. | ಅಂ.ಅ |
| | | | | | |
| 15 | ವಿದ್ಯಾರ್ಹತೆಃ (ಸ್ವಯಂ ದೃಢೀಕೃತ (ಸಹಿ ಮಾಡಿರುವ) ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು |
| | ಎಸ್. ಎಸ್. ಎಲ್. ಸಿ. | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | | |
| 16 | ತಾಂತ್ರಿಕ ವಿದ್ಯಾರ್ಹತೆ | | | | |
| 17 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? | ಹೌದು | | ಇಲ್ಲ | |
| | | | | | |
| 18 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಿದ್ದೀರಾ? | ಹೌದು | | ಇಲ್ಲ | |
| | | | | | |
| 19 | ಅಭ್ಯರ್ಥಿಯ ಖಾಯಂ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಈ-ಮೇಲ್ ಐಡಿ. | | | | |
| 20 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ ಹಾಗೂ ಈ-ಮೇಲ್ ಐ.ಡಿ. | | | | |

| | | |
|---|---|---|
| 21 | ನಿಮ್ಮ ಸ್ವವಿಳಾಸವಿರುವ ₹5/–ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರಾ? | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

**ಸ್ಥಳಃ**

**ದಿನಾಂಕಃ**

**ಅಭ್ಯರ್ಥಿಯ ಸಹಿ**

**PR-16**

**SC-10**

## IN THE COURT OF THE LVI ADDL. CITY CIVIL JUDGE, BENGALURU,

**P&S.C NO. 24 Of 2016 CCH – 57 Hearing Date: 15-02-2016.**

**BETWEEN:**

1. Harish B. Narasappa
   Son of Shri Narasappa, Aged about 42 years
2. Shruti Vidyasagar
   Wife of Sri Harish Narasappa, Aged about 35 Years,

   Both residing at 1103, Embassy Habitat, 59, Palace Road,
   Vasanthnagar, Bengaluru- 560 001 **…. PETITIONERS**

**AND :**

**NIL** **…. RESPONDENTS.**

**PUBLIC NOTICE**

WHEREAS the Petitioners above named have made an application under Section 222, 264 & 270 of the Indian Succession Act, 1925 for grant of Probate with respect to the last Will and Testament dated 24.07.2013 executed by late Smt. Usha Madhuranathan, wife of late Sri. V.V. Madhuranathan, who died in Bengaluru on 16.02.2015. Be it known that no Caveat has been lodged and the aforesaid petition is posted for hearing **on 15.02.2016 at 11.00 A.M**. Any person/s having objection to the grant of Probate may appear on the given date and raise their objections failing which the matter will proceed in accordance with law.

**SCHEDULE**

**IMMOVABLE PROPERTY**

All that piece and parcel of the residential house along with the land totally measuring 5,400 square feet on which the said residential house is constructed, bearing site No. 1672, 16th Main, 31st Cross, Banashankari 2nd Stage, Bengaluru-560070, PID No. 56-34-1672 in the BBMP records. The residential house and the immovable property are bounded as follows East by Site No. 1683, West by Road, North by Site No. 1671, South by Site No. 1673

**MOVABLE PROPERTIES**

1. Figurines and articles made of ivory, sandalwood, brass, bronze, porcelain, wood, stone etc.
2. Shares/mutual funds/bonds as follows:

| Sl. No. | Particulars |
|---|---|
| 1. | Canara Bank Shares, Folio Number> CNB72164271704, No. of Shares: 100 |
| 2. | TCS Shares, RF No. IN301135265430318, No. of Shares: 28 |
| 3. | Srimatha Mahila Sahakari Bank Niyamitha Shares, Folio No. No. of Shares : 25 |

3. Payment made towards purchase of bifurcated site No. 155 in survey number 33 of Kurubarakarenahalli, Bannekuppe Panchayathi, Bidadi Hobli Ramanagara Taluk, Bengaluru Rural District which was promoted by Brudavana Nagar Socio Economic & Cultural Development Trust with its office at No. 1728/2, 26th Main Road, 40th A Cross, 9th Block, Jayanagar, Bengaluru-560069. This investment is currently under litigation and an amount of Rs. 20,000/- has been received.

**P.D. 10**
**SC- 5**

**By Order of the Court,**
Registrar,
City Civil Court,
Bengaluru.

## IN THE COURT OF THE XIII ADDL CITY CIVIL JUDGE (CCH-22),

### MAYOHALL, BENGALURU

### G & WC 25009 of 2015

### Next Dt. of hg : 24-02-2016

(In the matter of the female minor ward : QUANITA SURESH MOHAMMED)

**BETWEEN :** Dr. SURESH KUNHI MOHAMMED
Son of Mr. CK Mohammed
Aged about 49 years
Resident of # 617, 6th 'B' Main Road,
Indiranagar 2nd stage,
Bengaluru-560038. **… PETITIONER**

**AND**

**NIL** **… RESPONDENT**

**PUBLIC NOTICE**

Notice is hereby given that a petition has been made to this court under Sections 29 of the Guardian & Wards Act, for grant of permission to alienate/sell the property of the minor, Ms Quanita Suresh Mohammed given in the schedule below.

Be it known that no caveat has been entered and the said petition is posted for **hearing on 24-02-2016 at 11.00 a.m**. in the Hon'ble Court of the XIII Additional City Civil & Sessions Judge, MayoHall, Bengaluru (CCH-22). Any person(s) claiming to have any interest may appear before the Court on the above mentioned day either in person or through a pleader before the grant of prayer in favour of the petitioner.

**SCHEDULE**

Immovable property : Three (3) Bed Room Residential Apartment : Unit bearing no A-1301 measuring about 1674 square feet, situated on the 13th floor in the residential multi storied building complex known in the name and style of DURGA RAINBOW, along with one car parking space beraing no A-1301/G-01 ; with proportionate share in common areas such as, passages, lobbies and lift and staircase ; also comprising of undivided share of 523 (five hundred twenth three) square feet of right, title and interest and ownership in the composite property then bearing survey nos 8/1, 9/1, 9/2 and 9/3 Mahadevapura Village, K.R. Puram Hobli Bengaluru, presently coming under the jurisdiction of BBMP, and located at Mahadevapura, Outer Ring Road, Bengaluru-560048.

Given under my hand and seal of the court this 27th day of January, 2016.

BY ORDER OF THE COURT

**P.D. 9**
**SC-05**

**Asst. Registrar**
City Civil Court,
Mayohall Unit, Bengaluru.

## ಚಿತ್ರದುರ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಚೇರಿ

### ಅಧಿಸೂಚನೆ

**ಸಂಖ್ಯೆ : 1/2016 ದಿನಾಂಕ : 13.01.2016**

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 19.02.2016 ಸಂಜೆ 5–00 ಗಂಟೆ.**

**ವಿಷಯ :–** ಚಿತ್ರದುರ್ಗ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಜವಾನರ ಹುದ್ದೆಗಳ ನೇಮಕಾತಿ ಬಗ್ಗೆ.

ಉಲ್ಲೇಖ :– 1. ಸರ್ಕಾರಿ ಆದೇಶ ಸಂಖ್ಯೆ : LAW 192 LCE 2009, dated: 23.10.2009.

2. ಗೌರವಾನ್ವಿತ ಉಚ್ಚ ನ್ಯಾಯಾಲಯ, ಬೆಂಗಳೂರು ರವರ ಪತ್ರ ಸಂಖ್ಯೆ : LCA II/19/2015, dated: 10.09.2015.

3. ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ ಹಾಗೂ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೆ ಹುದ್ದೆಗಳ ನೇಮಕಾತಿ) ನಿಯಮ, 1982.

4. ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರೇ ಹುದ್ದೆಗಳ ನೇಮಕಾತಿ) (ತಿದ್ದುಪಡಿ) ನಿಯಮ, 2007.

5. ಈ ಕಚೇರಿ ಟಿಪ್ಪಣಿ ಹಾಗೂ ದಿನಾಂಕ : 08.01.2016 ಹಾಗೂ 12.01.2016ರ ಟಿಪ್ಪಣಿ ಮೇಲಿನ ಆದೇಶ.

ಚಿತ್ರದುರ್ಗ ನ್ಯಾಯಾಂಗ ಘಟಕದಲ್ಲಿ ನೂತನವಾಗಿ 2ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವು ಕಾರ್ಯಾರಂಭ ಮಾಡಿದ್ದು, ಸದರಿ ನ್ಯಾಯಾಲಯಕ್ಕೆ ಸಿಬ್ಬಂದಿ ವರ್ಗವು ಉಲ್ಲೇಖ–1ರ ಸರ್ಕಾರಿ ಆದೇಶದನ್ವಯ ಮಂಜೂರಾಗಿರುತ್ತದೆ. ಸದರಿ ಆದೇಶದನ್ವಯ ಮಂಜೂರಾಗಿರುವ ಹುದ್ದೆಗಳನ್ನು ತುಂಬಲು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಉಲ್ಲೇಖ–2ರ ಪತ್ರದನ್ವಯ ಅನುಮತಿ ನೀಡಿರುತ್ತಾರೆ.

ಆದ್ದರಿಂದ, ಸದರಿ ನ್ಯಾಯಾಲಯಕ್ಕೆ ಸೃಜಿಸಲಾಗಿರುವ ಎರಡು ಜವಾನರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಹ ಅಭ್ಯರ್ಥಿಗಳು ಈ ಅಧಿಸೂಚನೆಯ ಜೊತೆಗೆ ಲಗತ್ತಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಅಥವಾ ಗಣಕೀಕೃತ ಅರ್ಜಿಯನ್ನು ರಚಿಸಿಕೊಂಡು ಅಭ್ಯರ್ಥಿಗಳು ಅರ್ಜಿಯಲ್ಲಿ ಹುದ್ದೆಗೆ ಸಂಬಂಧಿಸಿದಂತೆ ಎಲ್ಲಾ ಅಂಕಣಗಳಲ್ಲಿ ಮಾಹಿತಿಯನ್ನು ಭರ್ತಿ ಮಾಡಿ **ದಿನಾಂಕಃ 19.02.2016** ರಂದು ಸಂಜೆ 5.00 ಗಂಟೆ ಸಮಯದೊಳಗಾಗಿ **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗಕ್ಕೆ ತಲುಪುವಂತೆ ಸಲ್ಲಿಸತಕ್ಕದ್ದು.**

ಎ) ಸರ್ಕಾರಿ ಆದೇಶ ಸಂಖ್ಯೆಃಸಿಆಸುಇಃ08/ಸೇನೆನಿ/1995, ದಿನಾಂಕ : 20.06.1995

ಬಿ) ಸರ್ಕಾರಿ ಆದೇಶ ಸಂಖ್ಯೆಃಸಿಆಸುಇಃ53/ಸೇನೆನಿ/2007, ದಿನಾಂಕ : 04.01.2008

ಸಿ) ಸರ್ಕಾರಿ ಆದೇಶ ಸಂಖ್ಯೆಃಸಿಆಸುಇಃ128/ಸೇನೆನಿ/2008, ದಿನಾಂಕ : 01.08.2009

ರ ಮೇಲ್ಕಂಡ ಸರ್ಕಾರಿ ಆದೇಶಗಳ ಅನುಸಾರ ವರ್ಗೀಕರಣವನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

**ಜವಾನರುಃ ಹುದ್ದೆಗಳ ಸಂಖ್ಯೆ : 02**

| ಕ್ರ. ಸಂ. | ಮೀಸಲಾತಿ ವರ್ಗೀಕರಣ | ಹುದ್ದೆಗಳ ಸಂಖ್ಯೆ |
|---|---|---|
| 1 | ಪ್ರವರ್ಗ 3ಎ (ಅಂಗವಿಕಲ/ಇತರೆ) | 01 |
| 2 | ಸಾಮಾನ್ಯ ಅಭ್ಯರ್ಥಿ (ಮಹಿಳೆ) | 01 |
| **ಒಟ್ಟು** | | **02 ಹುದ್ದೆಗಳು** |

**ಶೈಕ್ಷಣಿಕ ವಿದ್ಯಾರ್ಹತೆ :**

**ಜವಾನರ ಹುದ್ದೆ :**

1. 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
2. ಕನ್ನಡ ಭಾಷೆ ಓದಲು ಮತ್ತು ಬರೆಯಲು ಬರಬೇಕು.

**ಆಯ್ಕೆ ವಿಧಾನ :**

ಜವಾನರ ಹುದ್ದೆಗೆ 7ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಆಧಾರದ ಅನ್ವಯ 01 ಹುದ್ದೆಗೆ 10ರ ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಂದರ್ಶನದ ಪ್ರಕ್ರಿಯೆಗೆ ತೊಡಗಿಸಲಾಗುವುದು ಹಾಗೂ ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ :**

ನೇಮಕ ಹೊಂದಿದ ಅಭ್ಯರ್ಥಿಗಳನ್ನು ಕರ್ನಾಟಕ ಸೇವಾ ನಿಯಮ, ಪರಿವೀಕ್ಷಣಾ ನಿಯಮ 1977ರ ಪ್ರಕಾರ 02 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿರತಕ್ಕದ್ದು, ಹಾಗೂ ಸದರಿ ಅವಧಿಯಲ್ಲಿ ತಮ್ಮ ಹುದ್ದೆಗಳಿಗೆ ಯಾವುದಾದರೂ ಇಲಾಖಾ ಪರೀಕ್ಷೆಗಳಲ್ಲಿ ಹಾಗೂ ಕನ್ನಡ ಭಾಷಾ ಪರೀಕ್ಷೆಯಲ್ಲಿ ನಿಯಮದಡಿ ಗೊತ್ತುಪಡಿಸಿದರೆ ಅವುಗಳಲ್ಲಿ ಉತ್ತೀರ್ಣರಾಗತಕ್ಕದ್ದು.

**ಪಿಂಚಣಿ ಸೌಲಭ್ಯ :**

ಸರ್ಕಾರದ ಆದೇಶ ಸಂಖ್ಯೆಃ ಎಫ್.ಡಿ. (ಎಸ್.ಪಿ.ಎಲ್)/04/ಪಿ.ಇ.ಟಿ/2005, ದಿನಾಂಕ :31.03.2006 ರಂತೆ ಅನ್ವಯಿಸುವುದು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆಯುವುದರ ಮೂಲಕ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.

**ವೇತನ ಶ್ರೇಣಿ :**

| | |
|---|---|
| ಜವಾನರು | ರೂ.9600–200–12000–250–13000–300–14200–350–14550 ಮತ್ತು ಇತರೆ ಭತ್ಯೆಗಳು |

**ವಯೋಮಿತಿ :–**

**ಕನಿಷ್ಠ 18 ವರ್ಷಗಳು**

**ಗರಿಷ್ಟ :**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| ಪ್ರವರ್ಗ 3 ಎ | 38 ವರ್ಷ |

1. ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.
2. ಸರ್ಕಾರಿ ಸೇವೆಯಲ್ಲಿರುವವರಿಗೆ/ವಿಧವೆಯರಿಗೆ/ಅಂಗವಿಕಲರಿಗೆ ವಯೋಮಿತಿಯಲ್ಲಿ 10 ವರ್ಷಗಳ ಗರಿಷ್ಠ ಮಿತಿಯಲ್ಲಿ ಸಡಿಲಿಕೆ ಇರುತ್ತದೆ.
3. ಮಾಜಿ ಸೈನಿಕರಿಗೆ ಗರಿಷ್ಟ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಅಗುವುದೋ ಅಷ್ಟು ವರ್ಷಗಳ ಸಡಿಲಿಕೆ.
4. ವಿಧವೆಯಾಗಿದ್ದರೆ ಅವರು ಗರಿಷ್ಟ ವಯೋಮಿತಿ ಸೌಲಭ್ಯವನ್ನು ಕೋರುವವರು ವಿಧವೆಯೆಂಬ ಬಗ್ಗೆ ತಹಶೀಲ್ದಾರ್ ದರ್ಜೆಗೆ ಕಡಿಮೆ ಇಲ್ಲದ ಕಂದಾಯ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರಗಳನ್ನು ದ್ವಿಪ್ರತಿಯಲ್ಲಿ ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
5. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ ಪಕ್ಷದಲ್ಲಿ ಗರಿಷ್ಟ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು ಅನ್ವಯಿಸುತ್ತದೆ.

**ಸಾಮಾನ್ಯ ಸೂಚನೆಗಳು :–**

1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

2) **ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಹಾಗೂ ಮೀಸಲಾತಿಯಡಿಯಲ್ಲಿ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.**

3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಪೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು. (ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ,) ಲಗತ್ತೀಕರಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

5) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ನಡತೆ ಮತ್ತು ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ಪ್ರಮಾಣ ಪತ್ರಗಳನ್ನು ಹಾಗೂ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ/ವಿದ್ಯಾಲಯದಿಂದ ಪಡೆದ ಒಂದು ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

6) ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

7) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಜನ್ಮ ದಿನಾಂಕ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

8) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸಬೇಕು. ಇಲ್ಲವಾದಲ್ಲಿ ಸದರಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

9) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಸ್ವ ವಿಳಾಸವಿರುವ ಲಕೋಟೆಯನ್ನು ಸಲ್ಲಿಸಬೇಕು ಸದರಿ ಲಕೋಟೆಯ ಮೇಲೆ ನೋಂದಾಯಿತ ಅಂಚೆಗೆ ತಗಲುವ ಅಂಚೆ ಚೀಟಿಯನ್ನು ಲಗತ್ತಿಸಿರಬೇಕು.

10) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು **ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮತ್ತು ಅರ್ಜಿಯ ಮೇಲೆ ತಪ್ಪದೇ ನಮೂದಿಸತಕ್ಕದ್ದು.**

11) ಸಂದರ್ಶನಕ್ಕೆ ಅರ್ಹತೆ ಗಳಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

12) ಅಸಮರ್ಪಕ ಅಥವ ಅಪೂರ್ಣ ಅಂಚೆ ವಿಳಾಸದಿಂದ ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಗಳಿಗೆ ಅವಕಾಶವಿರುದಿಲ್ಲ.

13) ವಿವರ ತುಂಬಿರುವ ಅರ್ಜಿಗಳನ್ನು ಈ ಕಚೇರಿಯ ವಿರಾಮದ ವೇಳೆಯನ್ನು ಹೊರತುಪಡಿಸಿ ಕೆಲಸದ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

14) ಪರಿಶಿಷ್ಟ ಜಾತಿ/ಪಂಗಡದ ಅಭ್ಯರ್ಥಿಗಳು ನಮೂನೆ–ಡಿ ಯಲ್ಲಿ ಹಾಗೂ ಪ್ರವರ್ಗ–2–ಎ, 2–ಬಿ, 3–ಎ, 3–ಬಿ, ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಮತ್ತು ಪ್ರವರ್ಗ–1 ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಇ ನಲ್ಲಿ ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರದ ನೆರಳಚ್ಚು ಪ್ರತಿಯನ್ನು ಸಲ್ಲಿಸತಕ್ಕದ್ದು, ಹಾಗೂ ಸಂದರ್ಶನಕ್ಕೆ ಅರ್ಹರಾದ ಪಕ್ಷದಲ್ಲಿ ಅಭ್ಯರ್ಥಿಯು ಅರ್ಜಿಯೊಂದಿಗೆ ಸಲ್ಲಿಸಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರದ ಮೂಲ ಪ್ರತಿಯನ್ನೇ ಹಾಜರುಪಡಿಸತಕ್ಕದ್ದು.

15) ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ದಿನಾಂಕಃ19.05.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆಃ ಸಿಆಸುಇಃ115/ಸೇನನಿ/2005ರಲ್ಲಿ ನಿಗಧಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ನೆರಳಚ್ಚು ಪ್ರತಿಯನ್ನು ಸಲ್ಲಿಸತಕ್ಕದ್ದು.

16) ಮಾಜೀ ಸೈನಿಕರು ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ ಬಗ್ಗೆ ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಎಸ್.ಬಿ. ವಸ್ತ್ರಮಠ**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿತ್ರದುರ್ಗ.

**ಅರ್ಜಿ ನಮೂನೆ**

ಭಾವಚಿತ್ರ

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**

**ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ – ಇವರಿಗೆ.**

**ಮಾನ್ಯರೆ,**

ಚಿತ್ರದುರ್ಗ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆ : 1/2016 ದಿನಾಂಕಃ13.01.2016 ರ ಪ್ರಕಾರ . . . . . . . . . . . . . . . . . . . . . ಹುದ್ದೆಗೆ ನಾನು . . . . . . . . . . . . . . . . . . ಮೀಸಲಾತಿಯ ವರ್ಗದಡಿಯಲ್ಲಿ ಆಯ್ಕೆಯನ್ನು ಬಯಸಿ ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | |
|---|---|---|---|---|---|
| 1 | ಅಭ್ಯರ್ಥಿಯ ಹೆಸರು | | | | |
| 2 | ತಂದೆಯ/ತಾಯಿಯ/ಗಂಡನ ಹೆಸರು | | | | |
| 3 | ಪೂರ್ಣ ವಿಳಾಸ | | | | |
| 4 | ವಯಸ್ಸು ಮತ್ತು ಜನ್ಮ ದಿನಾಂಕ | | | | |
| 5 | ಲಿಂಗ ಪುರುಷ/ಮಹಿಳೆ | | | | |
| 6 | ರಾಷ್ಟ್ರೀಯತೆ :<br>ಮತ :<br>ಜಾತಿ/ಉಪಜಾತಿ : | | | | |
| 7 | ಯಾವ ಹುದ್ದೆಗೆ ಅರ್ಜಿ ಸಲ್ಲಿಸಲು ಇಚ್ಛಿಸಿರುವುದರ ಬಗ್ಗೆ ನಮೂದಿಸುವುದು | | | | |
| 8 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ ? | | | | |
| 9 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು ಃ–(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೋಂದಣಿ ಸಂಖ್ಯೆ | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡವಾರು ಅಂಕಗಳು |
| ಎ | 7ನೇ ತರಗತಿ ಪರೀಕ್ಷೆ | | | | |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| | | |
|---|---|---|
| 10 | ಜಾತಿ/ಗ್ರಾಮೀಣ/ಮಾಜಿಸೈನಿಕ/ಅಂಗವಿಕಲ/ ವಿಧವೆ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ | |
| 11 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ (ನಿರಾಪೇಕ್ಷಣಾ ಪ್ರಮಾಣ ಪತ್ರ ಲಗತ್ತಿಸುವುದು)? | |
| 12 | ಸ್ವ-ವಿಳಾಸದ ಲಕೋಟೆಯ ಮೇಲೆ ನೋಂದಾಯಿತ ಅಂಚೆಗೆ ತಗಲುವ ಅಂಚೆ ಚೀಟಿಯನ್ನು ಲಗತ್ತಿಸಿರುತ್ತೀರಾ? | |
| 13 | ಅರ್ಜಿಸಲ್ಲಿಸಲು ಇಚ್ಚೆ ಪಡುವ ಇತರೆ ಯಾವುದಾದರು ವಿವರಗಳು : | |

**ಸೂಚನೆ :- ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕುವುದು.**

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ಹಾಗೂ ಅಗತ್ಯ ಶಿಸ್ತಿನ ಕ್ರಮ ಎದುರಿಸಲು ನಾನು ಬದ್ಧನಾಗಿರುತ್ತೇನೆ/ ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಿತ್ರದುರ್ಗ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ದನಿದ್ದೇನೆ/ಸಿದ್ದಳಿದ್ದೇನೆ.

ಸ್ಥಳ :

ದಿನಾಂಕ : **ಅಭ್ಯರ್ಥಿಯ ಸಹಿ.**

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ಶ್ರೀಮತಿ . . . . . . . . . . . . . . . . . . . . . . . . . ಇವರು ನಮ್ಮ ಇಲಾಖೆಯಲ್ಲಿ ದಿನಾಂಕ : . . . . . . . . . . . . . . . . . . ರಿಂದ . . . . . . . . . . . . . . . . . ರವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು . . . . . . . . . . . . . . . ಹುದ್ದೆಗೆ ಅರ್ಹರಿರುತ್ತಾರೆ ಮತ್ತು . . . . . . . . . . . . . . . . . ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿಯನ್ನು ನೀಡಲಾಗಿದೆ.

ಸ್ಥಳ :
ದಿನಾಂಕ : **ಪ್ರಾಧಿಕಾರದ ಸಹಿ.**

**P.R. 17**
**SC-10**

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59